ವಿವಿಧ ಸಹಕಾರ ಸಂಘಗಳ ಮೇಲಿನ ದೂರಿನ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

5 (87) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ 3 ವರ್ಷಗಳಲ್ಲಿ ಮಂಡ್ಯ ಜಿಲ್ಲೆಯ ವ್ಯಾಪ್ತಿಯಲ್ಲಿರುವ ವಿವಿಧ ಸಹಕಾರ ಸಂಘಗಳ ಮೇಲೆ ಸಹಕಾರ ಸಂಘಗಳ ನಿಬಂಧಕರು ಮತ್ತು ಉಪವಿಭಾಗದ ಉಪನಿಬಂಧಕರುಗಳ ಕಛೇರಿಗೆ ಸಹಕಾರ ಸಂಘಗಳ ವಿರುದ್ಧ ದಾಖಲಾಗಿರುವ ದೂರುಗಳ ಸಂಖ್ಯೆ ಎಷ್ಟು ; (ತಾಲ್ಲೂಕುವಾರು ದೂರುದಾರರ ದೂರಿನ ಪ್ರತಿಯೊಂದಿಗೆ ಸಂಪೂರ್ಣ ವಿವರ ನೀಡುವುದು)

(ಆ) ಇವುಗಳಲ್ಲಿ ಎಷ್ಟು ದೂರುಗಳನ್ನು ಇತ್ಯರ್ಥಪಡಿಸಿದೆ ತೆಗೆದುಕೊಂಡ ಕ್ರಮಗಳೇನು ; (ಸಂಪೂರ್ಣ ಮಾಹಿತಿ ನೀಡುವುದು) ಇತ್ಯರ್ಥವಾಗದ ಪ್ರಕರಣಗಳ ಸಂಖ್ಯೆ ಎಷ್ಟು ; (ಅದರ ಪ್ರತಿಯೊಂದಿಗೆ ಮಾಹಿತಿ ನೀಡುವುದು) ವಿಳಂಬವಾಗಲು ಕಾರಣವೇನು ; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ನಾಗಮಂಗಲ ತಾಲ್ಲೂಕು, ಕಸಬಾ ಹೋಬಳಿ ಪಡುವಲಪಟ್ಟಣ ಗ್ರಾಮದ ಹಾಲು ಉತ್ಪಾದಕರ ಸಂಘದ ಬಿ.ಎಂ.ಸಿ ಕೊಠಡಿ ನಿರ್ಮಾಣದಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರ ಪ್ರಕರಣ ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದರೆ, ಈವರೆಗೆ ತೆಗೆದುಕೊಂಡ ಕ್ರಮಗಳೇನು ;

(ಈ) ಅವ್ಯವಹಾರದ ಹಣ ಸಂಸ್ಥೆಗೆ ಮರುಪಾವತಿಸಲು ತೆಗೆದುಕೊಂಡ ಕ್ರಮವೇನು ? (ವಿವರವಾದ ಮಾಹಿತಿ ನೀಡುವುದು)